# ಕಾಯಕವೆ ಕೈಲಾಸ ಹೇಳಿದ್ದುದು ಬಸವಣ್ಣನವರು ಎಂಬುದಕ್ಕೆ ತರ್ಕ ಮತ್ತು ಪುರಾವೆ

ಪ್ರಸ್ತುತ ವಚನ ಸಂಪುಟಗಳಲ್ಲಿ **ಕಾಯಕವೆ ಕೈಲಾಸ** ಸಿಗುವುದು ಎರಡು ಕಡೆಗಳಲ್ಲಿ.
ಮೊದಲನೆಯದು ಮನಸಂದ ಮಾರಿತಂದೆಯವರ ವಚನದಲ್ಲಿ. ನಂತರ ಆಯ್ದಕ್ಕಿ ಮಾರಯ್ಯನವರ ವಚನದಲ್ಲಿ.

ಮನಸಂದ ಮಾರಿತಂದೆಯವರ ವಚನದಲ್ಲಿ ನೇರವಾಗಿ (Direct) ಹೇಳಲ್ಪಟ್ಟಿದೆ.

ಕಾಯವಿಡಿದಿಹನ್ನಬರ ಶಿವಭಕ್ತಂಗೆ **ಕಾಯಕವೆ ಕೈಲಾಸ**.
ಕಾಯಕವಿಲ್ಲದವನ ಅರಿವು ವಾಯವಾಯಿತ್ತು.
ಅಡುಗೂಲಿಯ ಮನೆಯಂತೆ ಗಡಿಗೆಯ ಗಂಜಿಯಾಸೆಬೇಡ.
ಕೊಡುವರೆಂದೊಬ್ಬರ ಮನೆಗೆ ಅಡಿಗಡಿಗೆ ಹೋಗಬೇಡ.
ಇಂತಿವರಡಿಯ ಕಾಬುದಕ್ಕೆ ಮೊದಲೆ ಅಡಗಿದೆಯಲ್ಲಾ,
ಮನಸಂದಿತ್ತು ಮಾರೇಶ್ವರಾ.
**-ಸಮಗ್ರ ವಚನ ಸಂಪುಟ: 8   ವಚನದ ಸಂಖ್ಯೆ: 942**

ಆಯ್ದಕ್ಕಿ ಮಾರಯ್ಯನವರ ವಚನದಲ್ಲಿ (Indirect) ಕೇಳಿ ಹೇಳಲ್ಪಟ್ಟಿದೆ.
(ಕಾಯಕವೆ ಕೈಲಾಸವಾದ ಕಾರಣ).
ಕಾಯಕದಲ್ಲಿ ನಿರತನಾದಡೆ,
ಗುರುದರ್ಶನವಾದಡೂ ಮರೆಯಬೇಕು,
ಲಿಂಗಪೂಜೆಯಾದಡೂ ಮರೆಯಬೇಕು,
ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು.
**ಕಾಯಕವೆ ಕೈಲಾಸ**ವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು

ಬಸವಣ್ಣನವರ ಒಂದು ವಚನ ಶರಣ ನಿದ್ರೆಗೈದಡೆ, ಕುಳಿತಡೆ, ನಡೆದುದೆ, ನುಡಿದುದೆ.... ಕ್ರಿಯಾಪದ ಮೂಲವಾಗಿದ್ದು, ತಾಡೋಲೆಗಳನ್ನು ಪ್ರತಿಮಾಡುವಾಗ ಕೊನೆಯ ಸಾಲಿನಲ್ಲಿ ಕಾಯಕ ದಲ್ಲಿನ (ಕ) ಬಿಟ್ಟು ಹೋಗಿ ಕಾಯ ವಾಗಿರಬೇಕೆಂಬುದು ಅನುಮಾನದ ಲಾಭ. (Benefit of doubt)
ಇದಕ್ಕೆ ಮೂರು ಕಾರಣಗಳು..

1. ಕ್ರಿಯಾಪದ-ತರ್ಕ ತರ್ಕದ 1 ವಚನ ಕ್ರಿಯಾಪದ ಕೈಲಾಸ ಮೂಲವಾಗಿ ಸ್ಪಷ್ಟವಾಗಿ ಮೂಡಿ ಬಂದಿರುವುದು..
2. ನಾಮಪದ-ತರ್ಕದ 10 ವಚನಗಳು ನಾಮಪದ ಕೈಲಾಸ ಮೂಲವಾಗಿ ಸ್ಪಷ್ಟವಾಗಿ ಮೂಡಿ ಬಂದಿರುವುದು.
3. ಕಾಯಕವ ಕಲಿಸುದಕೆ ನಾಯಕನು ಬಸವಣ್ಣ... ಎಂಬ ಜಾನಪದರ ಹಾಡು.

ಮನಸಂದ ಮಾರಿತಂದೆಯವರ ವಚನದಲ್ಲಿ ಒಂದು ಸಲ ಕಾಯಕ ಕ್ರಿಯಾಪದ ಬಂದಿದೆ (ಕಾಯಕವೆ ಕೈಲಾಸ ವೆಂಬ ಮೊದಲನೆ ಸಾಲು ಬಿಟ್ಟು). ಬಸವಣ್ಣನವರ ವಚನದಲ್ಲಿ ಶರಣ ಶಬ್ದದ ಮುಂದೆ 4 ಸಲ ಕ್ರಿಯಾಪದ ಬಂದಿದೆ.
ಶರಣ ಶಬ್ದದ ಮುಂದೆ ಕ್ರಿಯಾಪದಗಳಾದ ನಿದ್ರೆಗೈದಡೆ, ಕುಳಿತಡೆ, ನಡೆದುದೆ, ನುಡಿದುದೆ ಬಳಸಿದ್ದಾರೆ. ಹಾಗೆ ಮುಂದುವರೆದರೆ ಕೊನೆಯ ಸಾಲಿನಲ್ಲೂ ಶರಣ ಶಬ್ದದ ಮುಂದೆ ಕ್ರಿಯಾಪದವಾದ ಕಾಯಕವೆ ಬರಬೇಕಾಗುತ್ತದೆ. ನಾಮಪದವಾದ ಕಾಯ ಶಬ್ದ ಬಂದರೆ ಸರಿಯಾದ ತರ್ಕವಲ್ಲ ಎಂಬುದನ್ನು ಪ್ರಾಜ್ಞರು ಗಮನಕ್ಕೆ ತಂದುಕೊಳ್ಳಬೇಕಾಗಿ ವಿನಂತಿ.

ಶರಣ **ನಿದ್ರೆಗೈದಡೆ** ಜಪ ಕಾಣಿರೊ,
ಶರಣನೆದ್ದು **ಕುಳಿತಡೆ** ಶಿವರಾತ್ರಿ ಕಾಣಿರೊ,
ಶರಣ **ನಡೆದುದೆ** ಪಾವನ ಕಾಣಿರೊ,
ಶರಣ **ನುಡಿದುದೆ** ಶಿವತತ್ವ ಕಾಣಿರೊ,
ಕೂಡಲಸಂಗನ ಶರಣನ **ಕಾಯಕವೆ** ಕೈಲಾಸ ಕಾಣಿರೊ.

ಬಸವಣ್ಣನವರು 11 ವಚನಗಳಲ್ಲಿ ಕೈಲಾಸ ಶಬ್ದವನ್ನು ಬಳಸಿದ್ದಾರೆ. ಅದರಲ್ಲಿ ಮೇಲಿನ 1 ವಚನ ಕ್ರಿಯಾಪದ ಸೂಚಿಸಿದರೆ 10 ವಚನಗಳು ನಾಮಪದ ಸೂಚಿಸುತ್ತದೆ. ಬಸವಣ್ಣನವರ ಆ ಹತ್ತು ನಾಮಪದದ ವಚನಗಳನ್ನು ಅನುಕೂಲಕ್ಕಾಗೆ ಕೆಳಗೆ ಪಟ್ಟಿ ಮಾಡಿದ್ದೇನೆ. ಬಸವಣ್ಣನವರಂತೆ ಹಲವಾರು ಶರಣರು ಕೈಲಾಸವನ್ನು ನಾಮಪದವಾಗಿ ಬಳಸಿದ್ದಾರೆ. ಉದಾಹರಣೆಗೆ, ಒಟ್ಟು 243 ಕಡೆಗಳಲ್ಲಿ , 60 ವಚನಕಾರರು , 177 ವಚನಗಳಲ್ಲಿ ಕೈಲಾಸ ಪದವನ್ನು ಬಳಸಿರುತ್ತಾರೆ. ಅವುಗಳನ್ನು ವಚನ ಸಂಚಯ ದಿಂದ ಪಡೆಯಬಹುದು.
ಬಸವಣ್ಣನವರ ಮೂಲ ವಚನ ತಾಡೋಲೆಗಳನ್ನು ಓದಿದ ಜನಪದರು ಕಾಯಕವ ಕಲಿಸುದಕೆ ನಾಯಕನು ಬಸವಯ್ಯ ಎಂದು ಹಾಡಿದ್ದುದು ಎನಿಸುತ್ತದೆ.. ಕಾಯಕ ತತ್ತ್ವ -ಸಿದ್ಧಾಂತಗಳನ್ನು

ಕಲಿಸುವದಕ್ಕೆ ಬಸವಯ್ಯನೇ ನಾಯಕನು. ಆತನೇ ಹೊಸಮತಕ್ಕೆ ಒಡೆಯನು. ಕಾಯಕವೆ ಕೈಲಾಸವೆಂಬ ಹೊಸನುಡಿಯನ್ನು ಕೊಟ್ಟ ನಾಯಕ ಬಸವಯ್ಯ ಹೊಸ ಧರ್ಮವನ್ನು ಸಾರಿದ ರಾಯ..

ಕಾಯಕವ ಕಲಿಸುದಕೆ ನಾಯಕನು ಬಸವಯ್ಯ
ಜೀಯ ಹೊಸಮತಕೆ ಶಿವಭಕ್ತಿ | ಸಾರುದಕೆ
ರಾಯ ಜೀವನದ ಹೊಸ ನುಡಿಗೆ ||

ದೇವಲೋಕ, ವಾರಣಾಸಿ ಕೈಲಾಸವೆಂಬ ಸ್ಥಳ ವಿಶೇಷದ ಮುಂಚೆ **ನಾಮಪದ**ಗಳಾಗಿ **ಠಾವು**, **ಅಂಗಳ**, **ಕಾಯವನ್ನು** ಕೆಳಗಿನ ವಚನದಲ್ಲಿ ಬಳಸಿದ್ದಾರೆ. ಹಾಗಾಗಿ ಕಾಯವೂ ನಾಮಪದವೇ. ಈ ವಚನ ತಾಡೋಲೆಯಿಂದ ಸರಿಯಾಗಿ ಪ್ರತಿಯಾಗಿದೆ.

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ
ಈ ಲೋಕದೊಳಗೆ ಮತ್ತೆ ಅನಂತಲೋಕ
ಶಿವಲೋಕ, ಶಿವಾಚಾರವಯ್ಯಾ.
ಶಿವಭಕ್ತನಿದ್ದ **ಠಾವೆ** ದೇವಲೋಕ,
ಭಕ್ತನ **ಅಂಗಳ**ವೆ ವಾರಣಾಸಿ,
**ಕಾಯ**ವೆ ಕೈಲಾಸ,
ಇದು ಸತ್ಯ, ಕೂಡಲಸಂಗಮದೇವಾ.

ಮುಂದುವರೆದು ಕೆಳಗಿನ ಈ ವಚನಗಳಲ್ಲಿ ಕೈಲಾಸ ನಾಮಪದ ಸೂಚಕವಾಗಿರುವದನ್ನು ಗಮನಿಸುವದರ ಜೊತೆಗೆ ಕ್ರಿಯಾಪದಗಳಿಲ್ಲದಿರುವದನ್ನು ಗಮನಿಸಿ.

ಪುಣ್ಯಪಾಪಂಗಳೆಂಬವು ತಮ್ಮ ಇಷ್ಟ ಕಂಡಿರೆ,
`ಅಯ್ಯಾ ಎಂದಡೆ ಸ್ವರ್ಗ, `ಎಲವೊ ಎಂದಡೆ ನರಕ.
ದೇವಾ, ಭಕ್ತಾ, ಜಯಾ, ಜೀ[ಯಾ] ಎಂಬ ನುಡಿಯೊಳಗೆ
**ಕೈಲಾಸ**ವೈದುವುದೆ ಕೂಡಲಸಂಗಮದೇವಾ. 240

ಭಕ್ತಿಯೆಂಬ ಪಿತ್ತ ತಲೆಗೇರಿ **ಕೈಲಾಸದ** ಬಟ್ಟೆಯ ಹತ್ತುವ ವ್ಯರ್ಥರ ಕಂಡು

ಎನ್ನ ಮನ ನಾಚಿತ್ತು, ನಾಚಿತ್ತು.
ಕೈಲಾಸವೆಂಬುದೇನೊ, ಪೃಥ್ವಿಯ ಮೇಲೊಂದು ಮೊರಡಿ,
ಆ ಪೃಥ್ವಿಗೆ ಲಯವುಂಟು, ಆ ಮೊರಡಿಗೆಯು ಲಯವುಂಟು,
ಅಲ್ಲಿರ್ಪ ಗಂಗೆವಾಳುಕಸಮರುದ್ರರಿಗೂ ಲಯವುಂಟು,
ಇದು ಕಾರಣ, `ಯದ್ದೃಷ್ಟಂ ತನ್ನಷ್ಟಂ' ಎಂಬ ಶ್ರುತಿಯ ನೋಡಿ ತಿಳಿದು,
ಬಟ್ಟಬಯಲು ತುಟ್ಟತುದಿಯ ಮೆಟ್ಟಿನಿಂದ ಕೂಡಲಸಂಗಾ, ನಿಮ್ಮ ಶರಣ.

ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು,
ಉದ್ಧರಿಸುವನೊಬ್ಬ, ಶಿವಶರಣ ಸಾಲದೆ
ನಾರಾಯಣ ವೃದ್ಧಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ಬೇಡಿದ,
ಕೊಟ್ಟ ಬಲಿ ಬಂಧನಕ್ಕೆ ಸಿಕ್ಕಿದ.
ಈಶ ಭಕ್ತನಾಗಿ ಬಂದು ದಾಸನ ವಸ್ತ್ರವ ಬೇಡಿದ,
ಕೊಟ್ಟ ದಾಸ ತವನಿಧಿಯ ಪಡೆದ.
ಕಪಟದಿಂದ ನಾರಾಯಣ ಹಾರುವನಾಗಿ ಬಂದು ಕರ್ಣನ ಕವಚವ ಬೇಡಿದ,
ಕೊಟ್ಟ ಕರ್ಣ ಕಳದಲ್ಲಿ ಮಡಿದ.
ಕಾಮಾರಿ ಜಂಗಮವಾಗಿ ಬಂದು ಸಿರಿಯಾಳನ ಮಗನ ಬೇಡಿದ,
ಕೊಟ್ಟ ಸಿರಿಯಾಳಸೆಟ್ಟಿ ಕಂಚಿಯಪುರ ಕೈಲಾಸಕ್ಕೊಯ್ದ.
ನಾರಾಯಣ ಹಾರುವನಾಗಿ ಬಂದು ನಾಗಾರ್ಜುನನ ಶಿರವ ಬೇಡಿದ,
ಕೊಟ್ಟ ನಾಗಾರ್ಜುನನ ಶಿರಹೋಯಿತ್ತು.
ಶಿವನು ಜಂಗಮವಾಗಿ ಬಂದು ಸಿಂಧುಬಲ್ಲಾಳ ವಧುವ ಬೇಡಿದ,
ಕೊಟ್ಟ ಸಿಂಧುಬಲ್ಲಾಳ ಸ್ವಯಲಿಂಗವಾದ.
ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು;
ಕೊಡಿರೇ, ನಮ್ಮ ಕೂಡಲಸಂಗನ ಶರಣರಿಗೆ.

ಜನ್ಮ ಹೊಲ್ಲೆಂಬೆನೆ, ಜನ್ಮವ ಬಿಡಲಹೆನು.
ಭಕ್ತರೊಲವ ಪಡೆವೆನೆ, ಭಕ್ತಿಯ ಪಥವನರಿವೆನು.
ಲಿಂಗವೆಂದು ಬಲ್ಲೆನೆ, ಜಂಗಮವೆಂದು ಕಾಬೆನು.

ನಿಚ್ಚ ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ, ಕೈಲಾಸವ ಕಾಣಬಲ್ಲೆನು.
ಎನ್ನಲ್ಲಿ ನಡೆಯಿಲ್ಲಾಗಿ, ನಾನು ಭಕ್ತನೆಂತಹನೆಯ್ಯಾ,
ಕೂಡಲಸಂಗಮದೇವಾ 292

ಅರಿದರಿದರಿದು ! ಸಮಗಾಣಿಸಬಾರದು, ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದಡೆ
ಈಶ್ವರನು ಒಡೆಯಿಕ್ಕದೆ ಮಾಣುವನೆ
ಪಾತ್ರ ಅಪಾತ್ರವೆಂದು ಕಂಡಡೆ ಶಿವನೆಂತು ಮೆಚ್ಚುವನು
ಜೀವ ಜೀವಾತ್ಮವ ಸರಿಯೆಂದು ಕಂಡಡೆ
ಸಮವೇದಿಸದಿಪ್ಪನೆ ಶಿವನು
ತನ್ನ ಮನದಲ್ಲಿ `ಯತ್ರ ಜೀವಃ ತತ್ರ ಶಿವ'ನೆಂದು
ಸರ್ವಜೀವದಯಾಪಾರಿಯಾದಡೆ, ಕೂಡಲಸಂಗಮದೇವನು
ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ

ಬ್ರಾಹ್ಮಣನೆ ದೈವನೆಂದು ನಂಬಿದ ಕಾರಣ
ಗೌತಮಮುನಿಗೆ ಗೋವೇಧೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತ್ತು
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ದಕ್ಷಂಗೆ ಕುರಿದಲೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಪರಶುರಾಮ ಸಮುದ್ರಕ್ಕೆ ಗುರಿಯಾದನು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ನಾಗಾರ್ಜುನನ ತಲೆ ಹೋಯಿತ್ತು.
ದೇವಾ, ಭಕ್ತನೆಂದು ನಂಬಿದ ಕಾರಣ
ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು.

ಬಂದು ಬಲ್ಲಹ ಬಿಡಲು ಹೊಲೆಗೇರಿ ಎಂಬ ಹೆಸರೊಳವೆ ಅಯ್ಯಾ
ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು,
ಚಾಂಡಾಲವಾಟಿಕಾಯಾಂ ವಾ ಶಿವಭಕ್ತಃ ಸ್ಥಿತೋ ಯದಿ
ತತ್‌ಶ್ರೇಣಿಃ ಶಿವಲೋಕಸ್ಯ ತದ್ ಗೃಹಂ ಶಿವಮಂದಿರಮ್ ಎಂದುದಾಗಿ,
ಲೋಕದ ಡಂಬಕರ ಮಾತು ಬೇಡ,
ಕೂಡಲಸಂಗನಿದ್ದುದೇ ಕೈಲಾಸ.

ದಾಸನ ವಸ್ತ್ರವ ಬೇಡದ ಮುನ್ನ
ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ.
ಸಿರಿಯಾಳನ ಮಗನ ಬೇಡದ ಮುನ್ನ
ಕಂಚಿಯಪುರವ ಕೈಲಾಸಕ್ಕೊಯ್ದಡೆ ನಿಮ್ಮ ದೇವರೆಂಬೆ.
ಬಲ್ಲಾಳನ ವಧುವ ಬೇಡದ ಮುನ್ನ
ಸ್ವಯಲಿಂಗವ ಮಾಡಿದಡೆ ನಿಮ್ಮ ದೇವರೆಂಬೆ.
ದೇಹಿ ನೀನು, ವ್ಯಾಪಾರಿಗಳು ನಮ್ಮವರು.
ಬೇಡು, ಕೂಡಲಸಂಗಮದೇವಾ, ಎಮ್ಮವರ ಕೈಯಲು. 444

ನರ ಕೂರಂಬಿನಲೆಚ್ಚ, ಅವಂಗೊಲಿದೆಯಯ್ಯಾ,
ಅರಳಂಬಿನಲೆಚ್ಚ ಕಾಮನನುರುಹಿದೆ.
ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ
ಬೇಡನ ಕೈಲಾಸಕೊಯ್ದೆಯಯ್ಯಾ,
ಎನ್ನನೇತಕೊಲ್ಲೆ ಕೂಡಲಸಂಗಮದೇವಾ

ಶಿವಶರಣಪ್ಪ ಮದ್ದೂರ
ಬೆಂಗಳೂರು.
8904656742

ಲಯವೆಂದಿದ್ದಡೂ ತಪ್ಪದು.
ಪ್ರಾಯಶ್ಚಿತವೆಂದು ಪ್ರಕಾರವ ಮಾಡಿ,
ಶ್ವಾನನ ಕಾಲಿನಲ್ಲಿ ಸೋಮಪಾನವನೆರೆದು,
ಪಾಯಸ ಶುದ್ಧವಾಯಿತ್ತೆಂದು ಕೊಂಬವನಂತೆ,
ಈ ಗುಣವ ಕಾಬುದಕ್ಕೆ ಮೊದಲೆ
ಮನಸಂದಿತ್ತು ಮಾರೇಶ್ವರಾ. || ೪೧ ||

೯೪೦

ಕಾಯವಿಡಿದಿಹನ್ನಕ್ಕ ಕೈಯ ಕುರುಹು.
ಜೀವವಿಡಿದಿಹನ್ನಕ್ಕ ಭವಪಾಶ.
ಈ ಉಭಯವನರಿದಿಹನ್ನಕ್ಕ
ಮಹಾಶರಣರ ಸಂಗಸುಖ ಬೇಕು.
ಸುಖ ನಿಶ್ಚಯವಾದಲ್ಲಿ, ನಾ ನೀನೆಂಬ ಭಾವ
ಮನಸಂದಿತ್ತು ಮಾರೇಶ್ವರಾ. || ೪೨ ||

೯೪೧

ಕಾಯವಿಡಿದಿಹನ್ನಬರ ಆಗುಚೇಗೆಯನರಿಯಬೇಕು.
ಆಗೆಂಬುದೆ ಜೀವ, ಚೇಗೆಯೆಂಬುದೆ ಕಾಯ.
ಉಭಯವನಳಿದು ತಾ ತೊಲಗಿಪ್ಪುದೆ,
ಮನಸಂದುದು ಮಾರೇಶ್ವರಾ. || ೪೩ ||

೯೪೨

ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೆ ಕೈಲಾಸ.
ಕಾಯಕವಿಲ್ಲದವನ ಅರಿವು ವಾಯುವಾಯಿತ್ತು.
ಅಡುಗೂಲಿಯ ಮನೆಯಂತೆ ಗಡಿಗೆಯ ಗಂಜಿಯಾಸೆಬೇಡ.
ಕೊಡುವರೆಂದೊಬ್ಬರ ಮನೆಗೆ ಅಡಿಗಡಿಗೆ ಹೋಗಬೇಡ.
'ಇಂತಿವರಡಿಯ ಕಾಬುದಕ್ಕೆ ಮೊದಲೆ ಅಡಗಿದೆಯಲ್ಲಾ,'
ಮನಸಂದಿತ್ತು ಮಾರೇಶ್ವರಾ. || ೪೪ ||

೯೪೩

ಕಾಯಸೂತಕಿಗಳು ಕರ್ಮಕ್ಕೊಳಗು.